ಡಾ|| ಎ.ಕೆ. ಶಾಸ್ತ್ರಿ

# ಚಿತ್ರದುರ್ಗಕ್ಕೆ ಸಂಬಂಧಿಸಿದ ಶೃಂಗೇರಿ ಮಠದ ದಾಖಲೆಗಳು

ಶೃಂಗೇರಿಮಠದ ಪತ್ರಾಗಾರದಲ್ಲಿ ಚಿತ್ರದುರ್ಗವನ್ನು ಉಲ್ಲೇಖಿಸುವ ಕೆಲವೇ ದಾಖಲೆಗಳು ದೊರೆತಿವೆ. ನಮಗೆ ತಿಳಿದಂತೆ, ಚಿತ್ರದುರ್ಗದ ನಾಯಕರು (ಪಾಳೆಗಾರರು) ಸುಮಾರ ೨೦೦ ವರ್ಷಗಳ ಕಾಲ, ಅಂದರೆ, ಕ್ರಿ.ಶ. ೧೫೬೮–೧೭೭೯ರ ವರೆಗೆ ಕರ್ನಾಟಕದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಮಹತ್ವದ ಪಾತ್ರ ನಿರ್ವಹಿಸಿದ್ದಾರೆ.

ಶಾಲಿವಾಹನ ಶಕ ವರ್ಷ ೧೬೬೬ (ಕ್ರಿ.ಶ. ೧೭೪೪) ರಲ್ಲಿ ಮದಕರಿ ನಾಯಕರು ಶ್ರೀ ಮದಭಿನವ ಸಚ್ಚಿದಾನಂದ ಭಾರತೀ ಸ್ವಾಮಿಗಳ ಶೃಂಗೇರಿ ಮಠಕ್ಕೆ ಬಾಗೂರು ಸೀಮೆಯೊಳಗಿನ ಕಡಿವಾಣಕಟ್ಟೆ ಗ್ರಾಮವನ್ನು ದಾನವಾಗಿ ಕೊಟ್ಟ ಸಾಧನಪ್ರತಿ,[1] ಸುಮಾರು ಕ್ರಿ.ಶ. ೧೮೦೦ರಲ್ಲಿ, ದಿವಾನ್ ಪೂರ್ಣಯ್ಯನವರು ಚಿತ್ರದುರ್ಗದ ಚೆನ್ನಮಲ್ಲಪ್ಪ ನವರಿಗೆ, ಕಡಿವಾಣ ಕಟ್ಟೆ ಗ್ರಾಮವು ಶೃಂಗೇರಿ ಮಠಕ್ಕೆ ಇನಾಮಾಗಿ ನಡೆಸಿಕೊಂಡು ಬರುವಂತೆ ಬರೆಸಿ ಕಳುಹಿಸಿದ ಪರವಾನೆ,[2] ಕ್ರಿ.ಶ. ೧೮೩೬–೩೭ರ ಅವಧಿಯಲ್ಲಿ ಚಿತ್ರದುರ್ಗದ ಡಿವಿಜನಲ್ ಸುಪ್ರಿಂಟೆಂಡೆಟ್ ಸಾಹೇಬರು, ಶೃಂಗೇರಿಯ ಅಷ್ಟಮ ಶ್ರೀ ನರಸಿಂಹಭಾರತೀ ಸ್ವಾಮಿಗಳು ರಾಮೇಶ್ವರ ತೀರ್ಥಯಾತ್ರೆಗೆ ಹೋಗಿ ಬರುವದರಿಂದ, ತಾಲೂಕುಗಳ ಅಮಿಲ್, ಶಿರಸ್ತದಾರ್, ಜಹಗೀರದಾರ್ ಕಿಲ್ಲೆದಾರ್, ಚೌಕಿದಾರ್, ಠಾಣೆದಾರ, ಮುಂತಾದವರಿಗೆ ಕಳುಹಿಸಿದ ರಹಾದಾರಿಗಳು, ಸು.ಕ್ರಿ.ಶ. ೧೮೦೪ರಲ್ಲಿ ಶೃಂಗೇರಿ ಮಠಕ್ಕೆ ಹಣ ಸಲ್ಲಿಸುವ ವಿಷಯ ಕುರಿತು, ಚಿತ್ರದುರ್ಗ ಡಿವಿಜನ್ನಿನ ಆಕ್ಟಿಂಗ್ ಹೆಡ್ ಶಿರಸ್ತೇದಾರ ವೆಂಕಟರಾಯರು ಶೃಂಗೇರಿಯ ಶ್ರೀ ನರಸಿಂಹ ಭಾರತೀ ಸ್ವಾಮಿಗಳಿಗೆ ಬರೆದ ಬಿನ್ನವತ್ತಳೆ,[4] ಕ್ರಿ.ಶ.೧೮೮೫ರಲ್ಲಿ, ಪಾವಗಡ ತಾಲೂಕಿನ ಸೀಮೆಯ ತುಕಡಿಗೆ ಸಂಬಂಧಿಸಿ ಚಿತ್ರದುರ್ಗ ಜಿಲ್ಲೆಯ ಸಾಹೇಬರಿಂದ ಶೃಂಗೇರಿ ಮಠದ ಏಜಂಟ್‌ರವರಿಗೆ ಬರೆದ ಪತ್ರ[5] ಮುಂತಾದ ಕೆಲವು ದಾಖಲೆಗಳು ಶೃಂಗೇರಿ ಮಠದಲ್ಲಿ ದೊರಕಿವೆ. ಶೃಂಗೇರಿ ಮತ್ತು ಚಿತ್ರದುರ್ಗಕ್ಕೆ ಸಂಬಂಧ ಕಲ್ಪಿಸುವ ಕೆಲವು ದಾಖಲೆಗಳನ್ನು ಪ್ರಸ್ತುತದಲ್ಲಿ ಪರಿಚಯಿಸಲಾಗಿದೆ.

ಮೊದಲೇ ಹೇಳಿದಂತೆ, ಶಕವರ್ಷ೧೬೬೬ (ಕ್ರಿ.ಶ. ೧೭೪೪) ರಲ್ಲಿ ಮದಕರಿ ನಾಯಕರು[6] ಶ್ರೀಮದಭನವ ಸಚ್ಚಿದಾನಂದ ಭಾರತೀ ಸ್ವಾಮಿಗಳ ಶೃಂಗೇರಿ ಮಠಕ್ಕೆ ಬಾಗೂರು ಸೀಮೆಯೊಳಗಿನ ಕಡಿವಾಣಕಟ್ಟೆ ಗ್ರಾಮವನ್ನು ದಾನವಾಗಿಕೊಟ್ಟ ಶಾಸನ – ಪ್ರತಿಯು ಕಡತದಲ್ಲಿ ದೊರಕಿದೆ.[7] ಶಾಸನದ ಪ್ರಾರಂಭದಲ್ಲಿ "…. ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯಪ್ರಮಾಣ ಪಾರಾವಾರ ಪಾರೀಣ ಯಮ ನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ದಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನು ನಿಷ್ಠ.. ಕರ್ನಾಟಕ ಸಿಂಹಾಸನ ಪ್ರತಿಷ್ಠಾನಾಚಾರ್ಯ…" ಮುಂತಾದ ಯಥೋಕ್ತ ಬಿರುದಾವಳಿಗಳನ್ನು ಪ್ರಥಮ ಶ್ರೀ ಅಭಿನವ ಸಚ್ಚಿದಾನಂದ ಭಾರತೀ ಸ್ವಾಮಿಗಳಿಗೆ ನೀಡಲಾಗಿದೆ. ಅದೇ ರೀತಿ "…. ವಾಲ್ಮೀಕಿ ಗೋತ್ರದ ಶ್ರೀ ಮನ್ಮಹಾನಾಯಕಾಚಾರ್ಯ ಕಾಮನ ಶ್ರೀ ಕಸ್ತೂರಿ ಮೆದಕರಿ ನಾಯಕರ ಪುತ್ರರಾದ ಬರಮಂಣ ನಾಯಕರ ಪುತ್ರರಾದ ಮೆದಕರಿ ನಾಯಕರೂ ಬರೆಸಿ ಕೊಟ್ಟ ಅಗ್ರಹಾರದ ದಾನಪತ್ರದ ಕ್ರಮವೆಂತೆಂದರೆ ನಂಮ ಹಿರಿಯವರುಗಳಿಗೆ ಪುಂಣ್ಯ ಸುಕೃತವಾಗಬೇಕುಯೆಂದು ಗ್ರಾಮವಂನ್ನು ಹಿರಂಣ್ಯೋದಕ ದಾನ ಧಾರಪೂರ್ವಕವಾಗಿ ತ್ರಿವಾಚ ತ್ರಿಕರಣಯುಕ್ತವಾಗಿ ಶಿವಾರ್ಪಣವಾಗಿ ಕೊಟ್ಟು ಯಿಧೇವೆ ಯಿಾ ಗ್ರಾಮಕ್ಕೆ ಸಲುವ ಕಾಡಾರಂಭ ನಿರಾರಂಭ ನಿಧಿ ನಿಕ್ಷೇಪ ಜಲ ಪಾಷಾಣ ಅಕ್ಷಿಣಿ ಆಗಾಮಿಸಿಧಿ ಸಾಧ್ಯಂಗಳೆಂಬ ಅಷ್ಟಭೋಗ ತೇಜೋಪಾರ್ಜನೆಯಂನ್ನು ಆಚಾರ್ಯ ಸ್ವಾಮಿಗಳವರ ಶ್ರೀಮಠದ ಶ್ರೀ ಶಾರದಾಂಬಾ ಶ್ರೀ ವಿದ್ಯಾಶಂಕರನ ಧರ್ಮಕ್ಕೆ ನಂಮ ಪುತ್ರ ಪಾರಂಪರ್ಯವ ನಡೆಯಬೆಕುಯೆಂದು ಬರೆಸಿಕೊಟ್ಟ ದಾನಪತ್ರ…" ಎಂಬುದಾಗಿಯೂ ಶಾಸನದ ಪ್ರತಿಯಲ್ಲಿ ನಮೂದಿಸಲಾಗಿದೆ.

ದಿವಾನ ಪೂರ್ಣಯ್ಯನವರು ಚಿತ್ರದುರ್ಗದ ಚೆನ್ನಮಲ್ಲಪ್ಪನವರಿಗೆ, ಸಿದ್ಧಾರ್ಥಿ ಸಂವತ್ಸರ (ಸು.ಕ್ರಿ.ಶ ೧೮೦೦) ದಲ್ಲಿ ಕಳುಹಿದ ಪರವಾನೆ ಪತ್ರವು[8] ಮೇಲ್ಕಾಣಿಸಿದ ಶಾಸನವನ್ನು ದೃಢೀಕರಿಸುತ್ತದೆ. ಪರವಾನೆಯ

ಮುಖ್ಯಭಾಗವು ಇಂತಿದೆ. ರಾಜಶ್ರೀ ಚಿತ್ರದುರ್ಗದ ಚಂನ ಮಲ್ಲಪ್ಪನವರಿಗೆ ಪೂರ್ಣಯ ನವರು ನಮಸ್ಕಾರ ನಿಂಮ ತ್ತಾಲೂಕು ಬಾಗೂರ ಶಿಮೆ ಕಡ್ಡಿವಣಕಟ್ಟೆ ಗ್ರಾಮ ಗ25 ದುರ್ಗಿ ಯಿಪ್ಪತ್ತೈದು ವರಹಾನ ಗ್ರಾಮ ಉ ಪೂರ್ವಾರಭ್ಯಕು ಶೃಂಗೆರ್ರಿ ಶ್ರೀ ಸ್ವಾಮಿಗಳವರ ಮಠಕ್ಕೆ ಯಿನಾಮಾಗಿ ನಡದು ಬರುತ್ತ ಯಿದದ್ರಿಂದ ಯಿಾ ಗ್ರಾಮ ಯಥಪ್ರಕಾರಕ್ಕೆ ಯಿನಾಮಾಗಿ ನಡೆಸುವ ಹಾಗೆ ಅಪ್ಪಣೆ ಕೊಡ್ಡಿಶಿಯಿರುವದರಿಂದ ಯಿಾ ಗ್ರಾಮ ವಂನ್ನು ಮಠದವರ ವಶಾ ಮಾಡ್ಡಿಕೊಟ್ಟು ಯಾವ ವಿಷಯದಲ್ಲು ಉಪದ್ರವಿಲ್ಲದ ಹಾಗೆ ಮಾಡ್ಡಿ ಸರಾಗ ವಾಗಿ ನಡೆಸುತ್ತಾ ಬರುವುದು...'' ಮುಂತಾಗಿ ಮದಕರಿ ನಾಯಕರು ಕಾಲದಿಂದಲೇ 25 ವರಹದ ಕಡಿವಾಣಕಟ್ಟೆ ಗ್ರಾಮವು ಶೃಂಗೇರಿ ಮಠಕ್ಕೆ ಇನಾಮಾಗಿ ಬಂದಿದ್ದು ಮತ್ತು ಕಾಲಕ್ರಮೇಣ ಈ ಪದ್ದತಿಗೆ ತೊಂದರೆಯುಂ ಟಾಗಿದ್ದರಿಂದ ದಿವಾನ ಪೂರ್ಣಯ್ಯ ನವರು ಈ ಇನಾಮತಿಗ್ರಾಮವನ್ನು ಶೃಂಗೇರಿ ಮಠಕ್ಕೆ ಪುನಃ ಒಪ್ಪಿ ಸಿದ್ದು, ಮೇಲ್ಕಾಣಿಸಿದ ಪತ್ರಿಕೆಯಿಂದ ಸ್ಪಷ್ಟವಾಗುತ್ತದೆ.

ಕ್ರಿ.ಶ. ೧೭೭೯ರಲ್ಲಿ ಚಿತ್ರದುರ್ಗವು ಮೈಸೂರು ರಾಜ್ಯದಲ್ಲಿ ವಿಲೀನಗೊಮಡಿದ್ದನ್ನು ಮೊದಲೇ ಅರಿತಾ ಗಿದೆ. ನಾಲ್ಕನೇ ಆಂಗ್ಲ ಮೈಸೂರು ಯುದ್ಧ (೧೭೭೯) ದ ನಂತರ ಮೈಸೂರು ರಾಜ್ಯವನ್ನು ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಒಪ್ಪಿಸಲಾಯಿತು. ಮುಮ್ಮಡಿ ಕೃಷ್ಣರಾಜ ಒಡಯರವರು ಅಪ್ರಾಪ್ತ ವಯಸ್ಕರಾಗಿದ್ದುದರಿಂದ ಪೂರ್ಣಯ್ಯನವರೇ ರಾಜ ಪ್ರತಿನಿಧಿಯಾಗಿ ೧೮೧೧ರವರೆಗೆ ಅಧಿಕಾರ ನಿರ್ವಹಿಸಿ ದರು. ಮುಂದೆ, ೧೮೩೧ರಲ್ಲಿ, ಮುಮ್ಮಡಿ – ಕೃಷ್ಣ ರಾಜ ಒಡೆಯರು ಸರಕಾರ ನಡೆಸಲು ಅಸಮರ್ಥರೆಂಬ ಅಪಾದನೆಯ ಮೇರೆಗೆ, ಅಂದಿನ ಗವರ್ನರ್ ಜನರ ಲ್‌ರಾದ ಲಾರ್ಡ್ ವಿಲಿಯಮ್ ಬೆಂಟಿಂಕ್‌ರು ಮೈಸೂರು ರಾಜ್ಯವನ್ನು ಬ್ರಿಟಿಷ್ ಕಮಿಷನರ್‌ರ ಆಡಳಿತಕ್ಕೆ ಒಳಪಡಿಸಿದರು. ಕಮಿಷನರ್‌ರ ಆಡಳಿತ ೧೮೮೧ರ ವರೆಗೂ ಸಾಗಿತು. ಅಂದಿನ ಪ್ರಭುತ್ವವನ್ನು ಪುನಃ ದಯಪಾಲಿಸಿದರು. ಕಮಿಷನರ್‌ರ ಕಾಲದಲ್ಲಿ ಚಿತ್ರದುರ್ಗವು ಒಂದು ಆಡಳಿತ ವಿಭಾಗದ ಕೇಂದ್ರವಾ ಗಿತ್ತೆಂದು ತಿಳಿದು ಬರುತ್ತದೆ. ಕಮಿಷನರ್ ಕಾಲದ ಕೆಲವು ದಾಖಲೆಗಳು ಶೃಂಗೇರಿ ಮಠದಲ್ಲಿ ಲಭ್ಯವಾಗಿವೆ.

ಶೃಂಗೇರಿ ಶ್ರೀ ನರಸಿಂಹಭಾರತೀ ಸ್ವಾಮಿಗಳು ಮೈಸೂರಿಗೆ ಬಂದು, ಅಲ್ಲಿಂದ ರಾಮೇಶ್ವರಕ್ಕೆ ಹೋಗಿ ಬರುವದರಿಂದ, ಅವರಿಗೆ ಸಕಲ ಮರ್ಯಾದೆ ನೀಡಿ ಎಲ್ಲ ಸೌಲಭ್ಯಗಳನ್ನು ಕಲ್ಪಿಸಿಕೊಡಬೇಕಾಗಿ ಚಿತ್ರದುರ್ಗ ತುಕಡಿ ಸುಪ್ರಿಂಟೆಂಡೆಂಟ್ ಕ್ಯಾಪ್ಟನ್ ಡಾಬ್ಸ್ ಸಾಹೇಬರು ೧೮೩೭ರಲ್ಲಿ ತಾಲೂಕುಗಳ ಅಮಿಲ, ಶಿರಸ್ತೆದಾರ, ಪೇಷ್ಕಾರ ಮುಂತಾದವರಿಗ ರಹದಾರಿಯನ್ನು ನಿರೂಪಿಸಿ ದರು.[9] ಸದರಿ ವಿಷಯಕ್ಕೆ ಸಂಬಂಧಿಸಿ, ೧೮೩೭–೩೭ರ ಅವಧಿಯಲ್ಲಿ, ಡಾಬ್ಸ ಸಾಹೇಬರು ಹೊರಡಿಸಿದ ಇನ್ನೂ ಮೂರು ರಹಾದಾರಿಗಳು ದೊರೆತಿವೆ.[10] ಶ್ರೀಮಠದ ವಿಚಾರವಾಗಿ ಕಮಿಷನರ್ ಸಾಹೇಬರು ಸಾದರ ಮಾಡಿರುವ ರಹಾದಾರಿ ಮೇರೆಗೆ ಲೇಶವೂ ನ್ಯೂನತೆ ಇಲ್ಲದ ಹಾಗೆ ನಡೆದುಕೊಳ್ಳಬೇಕು. ರಹದಾ ರಿಗೆ ವಿರೋಧವಾಗಿ ನಡೆದವರನ್ನು ತಕ್ಕ ಶಿಕ್ಷೆಗೆ ಗುರ ಪಡಿಸಲಾಗುವದೆಂದು ನಮೂದಿಸಲಾಗಿದೆ.

ಸ್ವಾಮಿಗಳು, ವೇದಮೂರ್ತಿ ನರಸಿಂಹ ಶಾಸ್ತ್ರಿಗಳ ಸಂಗಡ ಶ್ರೀಮುಖ, ಫಲ ಮಂತ್ರಾಕ್ಷತೆ ಕಳುಹಿಸಿರುವ ದನ್ನು ಶಿರಸಾವಹಿಸಿರುವುದಾಗಿ ಮತ್ತು ಗೃಹಕೃತ್ಯ ತಾಪತ್ರಯದಿಂದ ತನ್ನ ಕಡೆಯ ಜನಕ್ಕೆ ಧರ್ಮಶಾಸನ ದಂತೆ ಮಠಕ್ಕೆ ಹಣ ಸಲ್ಲಿಸುವಲ್ಲಿ ಸ್ವಲ್ಪ ವ್ಯತ್ಯಾಸವಾಗಿ ದ್ದಕ್ಕಾಗಿ, ಶ್ರೀಗಳವರು ಅನುಗ್ರಹಿಸ ಬೇಕೆಂದು ಚಿತ್ರ ದುರ್ಗ ಡಿವಿಜನ್ ಅಕ್ಟಿಂಗ್ ಹೆಡ್ ಶಿರಸ್ತೆದಾರ ವೆಂಕ ಟರಾಯರು, ೧೮೪೦ರಲ್ಲಿ, ಶೃಂಗೇರಿ ಮಠದ ಅಷ್ಟಮ ಶ್ರೀ ನರಸಿಂಹಭಾರತೀ (ಪೀಠಾಧಿಪತ್ಯ ೧೮೧೭–೭೯) ಸ್ವಾಮಿಗಳಿಗೆ ಪ್ರಣಾಮ ಪೂರ್ವಕವಾಗಿ ಬರೆದ ವಿಜ್ಞಾ ಪನಾ ಪತ್ರವು ಶ್ರೀ ಮಠದ ಪಾತ್ರಾಗಾರದಲ್ಲಿ ದೊರಕಿದೆ.[11]

ಚಿತ್ರದುರ್ಗ ಜಿಲ್ಲೆಯ ಸಾಹೇಬರು ೧೮೮೯ರ ಜನವರಿ 15ರಂದು, ತುಮಕೂರು ಜಿಲ್ಲೆಯ ಪಾವಗಡ ತಾಲೂಕಿಗೆ ಸಂಬಂಧಿಸಿದ ವಿಷಯವನ್ನು ಶೃಂಗೇರಿ ಮಠದ ಏಜೆಂಟ್ರವರಿಗೆ ಬರೆದ ಪತ್ರವೊಂದು ಲಭಿಸಿದೆ.[12]

ಈ ರೀತಿಯಾಗಿ, ಶೃಂಗೇರಿ ಮಠದ ಕಡತಗಳ ಲ್ಲಿಯ ೨ ಮತ್ತು ಕಾಗದಗಳಲ್ಲಿಯ 6 ದಾಖಲೆಗಳು ಚಿತ್ರದುರ್ಗಕ್ಕೆ ಸಂಬಂಧಿಸಿವೆ. ೧೭೪೪ರ ಸಾಧನ ಪ್ರತಿಯು ಅತಿ ಹಳೆಯದಾದರೆ, ೧೮೮೯ರ ಪತ್ರವು ಇತ್ತೀಚಿನದು. ಮೇಲ್ಕಾಣಿಸಿದ ಕೇವಲ ೮ ದಾಖಲೆಗಳ ಆಧಾರದಿಂದ ಶೃಂಗೇರಿ ಮಠದ ಅಥವಾ ಚಿತ್ರದು ರ್ಗದ ೧೪೫ ವರ್ಷಗಳ ಸಂಪೂರ್ಣ ಐತಿಹಾಸಿಕ ಚಿತ್ರಣ ನೀಡಲು ಸಾಧ್ಯವಿಲ್ಲ. ಆದರೂ ಪ್ರಾದೇಶಿಕ

ಚರಿತ್ರೆಯನ್ನು ಪುನಃ ರೂಪಿಸಿ, ಆ ಮೂಲಕ ಕರ್ನಾಟಕದ ಚರಿತ್ರೆಯನ್ನು ಸಮಗ್ರವಾಗಿ ರೂಪಿಸುವಲ್ಲಿ, ಶೃಂಗೇರಿ ಮಠದ ಈ ಐತಿಹಾಸಿಕ ದಾಖಲೆಗಳು ಪ್ರಯೋಜನಕಾರಿಯಾಗಿವೆ.

---

## ಟಿಪ್ಪಣಿ

ಶೃಂಗೇರಿ ಮಠದ ಇತಿಹಾಸವನ್ನರಿಯಲು ಲೇಖಕರ ಈ ಕೆಳಗಿನ ಗ್ರಂಥಗಳನ್ನು ಓದಿರಿ. 1) A History of Sringeri, Karnataka University, 1982; 2) ಶೃಂಗೇರಿ ಧರ್ಮಸಂಸ್ಥಾನ, ಶೃಂಗೇರಿ ಮಠ, 1983; 3) Selections from the Kadatas of the Sringeri Matha Vol.I, ICHR 1982 (Un Pub.) ಪ್ರಸ್ತುತ ಲೇಖನದಲ್ಲಿಯ ದಾಖಲೆಗಳಿಗೆ ಈ ಯಾದಿಗಳೇ ಆಧಾರ. i. Contents of the Kadatas of the Sringeri Matha (Un Pub.), Karnataka State Archieves, 1974. ii. CKRASM (Catalogue of the Kannada Records in the Archives of the Sringeri Matha) Part I and II, Un-Pub. Karnataka State Archives, 1988.

## ಉಲ್ಲೇಖನಗಳು


ಕ (ಕಡತ) 184, ದಾ (ದಾಖಲೆ) 108

2. ಕ 187, ದಾ. 12
3. CKRASM ಭಾಗ 1, ಧಾಖಲೆಗಳು: R.10, R.11, R.12
   CKRASM ಭಾಗ 2, ದಾಖಲೆ C 33
4. CKRASM ಭಾಗ 1 ದಾ Mis 13
5. CKRASM ಭಾಗ 1 ದಾ. R 39
6. ಚಿತ್ರದುರ್ಗದ ಪಾಳೆಗಾರರ ಮನೆತನದಲ್ಲಿ, ಹೈದರಲಿಯ ಸೈನ್ಯದೊಂದಿಗೆ ಕಾದಾಡಿದ ಐದನೇ ಮದಕರಿ ನಾಯಕರು (ಕ್ರಿ.ಶ. 1755-79) ಪ್ರಸಿದ್ಧರು. ಆದರೆ ಶಾಸನದಲ್ಲಿ ಕಾಲವನ್ನು ಕ್ರಿ.ಶ. 1744 ಎಂದು ನಮೂದಿಸಲಾಗಿದ್ದರಿಂದ, ಸ್ವಲ್ಪ ವ್ಯತ್ಯಾಸ ದೂರೀಕರಿಸುವಂತಿಲ್ಲ. ಏಕೆಂದರೆ, ದಿವಾನ ಪೂರ್ಣಯ್ಯನವರ ಪರವಾನೆ ಪತ್ರವು ಇದೇ ಶಾಸನವನ್ನು ದೃಢೀಕರಿಸುತ್ತದೆ.
7. ಕ 184, ದಾ 108
8. ಕ 187, ದಾ 12
9. CKRASM ಭಾಗ 1, ದಾ R 10
10. CKRASM ಭಾಗ 1, ದಾ. 11 ಮತ್ತು 12
    CKRASM ಭಾಗ 2, ದಾ. C33
11. CKRASM ಭಾಗ 1, ದಾ Mis 13
12. CKRASM ಭಾಗ 1, ದಾ R 39